ವಿಲಾಸ ಮ. ಜೋಗುಳ *

# ತಾವರಗೇರಾದಲ್ಲಿ ಕಲ್ಲಾಸರೆಯ ವರ್ಣಚಿತ್ರಗಳ ಶೋಧನೆ

ಉತ್ತರ ಕರ್ನಾಟಕದಲ್ಲಿ ಕಾಡುಗಳಿಲ್ಲದ ಗುಡ್ಡಗಳೇ ಹೆಚ್ಚು. ಇಲ್ಲಿ ದೊಡ್ಡ ಬಂಡೆಗಳು ಅಗಲವಾಗಿ ಎತ್ತರದಲ್ಲಿ ಮುಂದಕ್ಕೆ ಚಾಚಿ ಕೆಳಗಡೆ ಒಳ್ಳೆಯ ಆಶ್ರಯವನ್ನು ನೀಡುತ್ತವೆ. ಇವುಗಳಿಗೆ ಉತ್ತರ ಕರ್ನಾಟಕದ ರಾಯಚೂರು ಪ್ರದೇಶದಲ್ಲಿ ''ವಬ್ಬು''ಗಳು ಎಂದು ಕರೆಯುತ್ತಾರೆ. ಇಂತಹ ವಬ್ಬುಗಳಲ್ಲಿ ಕೆಮ್ಮಣ್ಣಿನಲ್ಲಿ ದನ, ಎತ್ತು, ಜಿಂಕೆ, ಮನುಷ್ಯರ ಮೊದಲಾದ ರೇಖಾಚಿತ್ರಗಳನ್ನು ಸಾಂಕೇತಿಕವಾಗಿ ಬಿಡಿಸಿರುತ್ತಾರೆ. ಅಂದರೆ ಬರೇ ಬಾಹ್ಯ ರೇಖೆಗಳನ್ನು ಬಿಡಿಸಿ, ಒಳಗೆಲ್ಲ ಬಣ್ಣದಿಂದ ತುಂಬಿರುತ್ತಾರೆ. ಕಣ್ಣು, ಮೂಗು, ಮುಂತಾದವುಗಳನ್ನು ತೋರಿಸಿರುವುದಿಲ್ಲ. ಆದರೂ ಕೂಡ ರೇಖೆಗಳು ಸಹಜವಾಗಿದ್ದು ಒಳ್ಳೆಯ ನುರಿತ ಕಲಾವಿದನು ಚಿತ್ರಿಸಿದಂತೆ ಕಾಣುವುದು.

ರಾಯಚೂರು ಜಿಲ್ಲೆಯ ಕುಷ್ಟಗಿ ತಾಲೂಕಿನ ತಾವರಗೇರಾದಲ್ಲಿ ಇಂಥ ಕಲ್ಲಾಸರೆಯ ವರ್ಣಚಿತ್ರಗಳು ಬೆಳಕಿಗೆ ಬಂದಿವೆ. ಈಗಾಗಲೇ ಈ ಪ್ರದೇಶದಲ್ಲಿ ಅ. ಸುಂದರ ಅವರು ಸಂಶೋಧನೆಯನ್ನು ನಡೆಸಿ ಕುಟ್ಟಿದ ಚಿತ್ರಗಳನ್ನು ಬೆಳಕಿಗೆ ತಂದಿರುವರು. (ಸುಂದರ ಅ. ; ೧೯೬೫ : ೮-೯) ನನ್ನ ಒಂದು ಸಂಶೋಧನಾ ಕಾರ್ಯದಲ್ಲಿ ಏಳು ಸ್ಥಳಗಳಲ್ಲಿ ಕಲ್ಲಾಸರೆಯ ವರ್ಣಚಿತ್ರಗಳು ನನ್ನ ಗಮನಕ್ಕೆ ಬಂದಿವೆ. ತಾವರಗೇರಾದಿಂದ ಗಂಗಾವತಿಗೆ ಹೋಗುವ ಮಾರ್ಗದಲ್ಲಿ ಸುಮಾರು ೩ ಕಿ.ಮೀ. ದೂರದಲ್ಲಿ ಗಾಣಗಿತ್ತಿ, ಸಂತೆ ಬಝಾರ ಡೋಣಿ, ಮಾನಪ್ಪಯ್ಯ,ಒಂಟೆ, ಆನೆ ಎಂಬ ಎತ್ತರವಾದ ಕಡಿದಾದ ಬೆಟ್ಟಗಳಿವೆ. ಇಲ್ಲಿ ಕಲ್ಲಾಸರೆಯ ವರ್ಣಚಿತ್ರಗಳಿಗೆ ಬೆಳಕಿನ ಅಭಾವವಿರುವದರಿಂದ, ಛಾಯಾಚಿತ್ರ ಸೆರೆ ಹಿಡಿಯಲು ಬೇಕಾದ ಉಪಕರಣಗಳು ಇಲ್ಲದಿರುವದರಿಂದ ಅವುಗಳನ್ನು ಸರಿಯಾಗಿ ಪ್ರತಿ ಮಾಡಲು ಸಾಧ್ಯವಾಗಿಲ್ಲ. ಇಲ್ಲಿ ಗಾಣಗಿತ್ತಿ ಗುಡ್ಡದ ಉತ್ತರ ಭಾಗ ಹಾಗು ದಕ್ಷಿಣ ಭಾಗದಲ್ಲಿ ಕಲ್ಲಾಸರೆಯಲ್ಲಿ ವರ್ಣಚಿತ್ರಗಳಿವೆ. ಈ ಬೆಟ್ಟದ ಉತ್ತರ ಭಾಗದಲ್ಲಿ ದೊಡ್ಡ ಕಲ್ಲಾಸರೆಯಲ್ಲಿ ಅನೇಕ ವರ್ಣಚಿತ್ರಗಳಿವೆ.

೧) ಜಿಂಕೆಗಳ ಒಂದು ದೊಡ್ಡ ಸಮೂಹವಿದೆ. ಒಟ್ಟು ಹನ್ನೆರಡು ಜಿಂಕೆಗಳನ್ನು ಚಿತ್ರಿಸಲಾಗಿದ್ದು, ಅವೆಲ್ಲವುಗಳು ಒಂದರ ಹಿಂದೆ ಒಂದರಂತೆ ಮುಂದೆ ಸಾಗುತ್ತಿವೆ. ದೇಹದ ಬಾಹ್ಯ ರೇಖೆಯನ್ನು ಚಿತ್ರಿಸಿ ಅದರ ಒಳಮೈಯೆಲ್ಲಾ ಬಣ್ಣದಿಂದ ತುಂಬಿರುವರು. ಅವುಗಳ ಕೋಡುಗಳು ತುಂಬಾ ದೊಡ್ಡದಾಗಿದ್ದು ಇಂಗ್ಲೀಷ್ ಮೂಲಾಕ್ಷರದ "U" ಮತ್ತು "V" ಆಕಾರದಲ್ಲಿ ಇವೆ. ಇವುಗಳು ಪಿಕ್ಲಿಹಾಳದಲ್ಲಿ ಬೆಳಕಿಗೆ ಬಂದಿರುವ ಜಿಂಕೆ ಸಮೂಹಕ್ಕೆ ಹೋಲಿಕೆಯಾಗುತ್ತದೆ. (ನ್ಯೂಮೆಯರ್, ಎರ್ವಿನ್; ೧೯೯೩ : ೧೭೭-೧೮೬)

ಇದೇ ಕಲ್ಲಾಸರೆಯಲ್ಲಿ ಇನ್ನೂ ಹಲವಾರು ವರ್ಣಚಿತ್ರಗಳಿವೆ.

ಅ) ಒಂದು ಮಂಗನ ಚಿತ್ರವಿದ್ದು, ಅದು ತನ್ನ ಎರಡೂ ಕಾಲುಗಳನ್ನು ಮುಂದೆ ಚಾಚಿ ಗಿಡದಿಂದ ಜಿಗಿಯುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಬಾಹ್ಯ ರೇಖೆಯನ್ನು ಮಾತ್ರ ಚಿತ್ರಿಸಲಾಗಿದ್ದು ಕಣ್ಣು, ಮೂಗು, ಬಾಯಿಯನ್ನು ತೋರಿಸಿರುವರು. ಇದು ಒಂದು ಅಪರೂಪದ ಚಿತ್ರವಾಗಿದೆ.

ಬ) ಮಂಗನ ಚಿತ್ರದ ಬದಿಯಲ್ಲಿಯೇ ಹುಲಿಯ (?) ಚಿತ್ರವನ್ನು ಚಿತ್ರಿಸಲಾಗಿದ್ದು, ಅದು ತನ್ನ ಬಾಲವನ್ನು ಸ್ವಲ್ಪ

* ಇತಿಹಾಸ ಉಪನ್ಯಾಸಕರು, ಶ್ರೀ ಹುಚ್ಚೇಶ್ವರ ಗ್ರಾಮೀಣ ಪದವಿ ಮಹಾವಿದ್ಯಾಲಯ, ಕಮತಗಿ, ಹುನಗುಂದ ತಾಲೂಕು ಬಿಜಾಪುರ ಜಿಲ್ಲೆ

ಮೇಲಕ್ಕೆತ್ತಿದ್ದಂತೆ ಚಿತ್ರಿಸಲಾಗಿದೆ. ಇದರ ದೇಹದ ಬಾಹ್ಯ ರೇಖೆಯನ್ನು ಚಿತ್ರಿಸಿ ಅದರ ಒಳಮೈಯನ್ನು ಬಣ್ಣದಿಂದ ತುಂಬಿರುವರು.

ಕ) ಇಬ್ಬರು ಮನುಷ್ಯರು ಒಬ್ಬರ ಬದಿಯಲ್ಲಿ ಮತ್ತೊಬ್ಬರು ನಿಂತು ತಮ್ಮ ಹೆಗಲ ಮೇಲೆ ಒಂದೇ ಉದ್ದವಾದ ಕೋಲನ್ನು ಎತ್ತಿಕೊಂಡು ತಮ್ಮ ಒಂದು ಕಾಲನ್ನು ಮೇಲಕ್ಕೆತ್ತಿ ಕುಣಿಯುತ್ತಿರುವಂತೆ ಚಿತ್ರಿಸಲಾಗಿದೆ. ಕುಣಿತದಲ್ಲಿ ಇಬ್ಬರು ಒಂದೇ ರೀತಿಯಾದ ಪದ್ಧತಿ, ಅನುಕರಣೆಯನ್ನು ಅನುಸರಿಸಿರುವುದು ಒಂದು ವಿಶೇಷ.

ಡ) ಈ ಎಲ್ಲ ಮೇಲಿನ ಚಿತ್ರಗಳ ಕೊನೆಯಲ್ಲಿ ಒಂದು ಜಲಪಾತದ ಚಿತ್ರವನ್ನು ಚಿತ್ರಿಸಿರುವರು. ಬೆಟ್ಟದಿಂದ ನೀರು ಕೆಳಕ್ಕೆ ದುಮುಕುತ್ತಿರುವಂತೆ ಚಿತ್ರಿಸಿರುವರು.

ಇನ್ನೂ ಗಾಣಗಿತ್ತಿ ಗುಡ್ಡದ ದಕ್ಷಿಣ ಭಾಗದಲ್ಲಿಯ ಕಲ್ಲಾಸರೆಯ ವರ್ಣಚಿತ್ರಗಳು:

೧) ಇಲ್ಲಿ ಒಂದು ದೊಡ್ಡ ಬಂಡೆಯ ತೆಳಭಾಗದಲ್ಲಿ ಮೂರು ಜಿಂಕೆಗಳನ್ನು ಚಿತ್ರಿಸಿರುವರು. ಅವು ಒಂದರ ಹಿಂದೆ ಒಂದು ಕೂಡಿಕೊಂಡು ಮುಂದೆ ಸಾಗುವಂತೆ ಚಿತ್ರಿಸಲಾಗಿದ್ದು, ಇವುಗಳ ಕೋಡುಗಳು ಇಂಗ್ಲೀಷ್ ಮೂಲಾಕ್ಷರದ "U" ಮತ್ತು "V" ಆಕಾರದಲ್ಲಿವೆ.

೨) ಇಲ್ಲಿಯೇ ಬೇರೊಂದು ಬಂಡೆಯ ತಳಭಾಗದಲ್ಲಿ ಇಬ್ಬರು ಬೇಟೆಗಾರರ ಚಿತ್ರವನ್ನು ಚಿತ್ರಿಸಲಾಗಿದೆ. ಒಬ್ಬನು ಬಿಲ್ಲಿಗೆ ಬಾಣವನ್ನು ಹೂಡಿ (ಪ್ರಾಣಿಗೆ) ಬೇಟೆಗಾಗಿ ಗುರಿ ಇಟ್ಟಿರುವಂತೆ, ಇನ್ನೊಬ್ಬನು ತನ್ನ ಎಡಭಾಗದ ಹೆಗಲ ಮೇಲೆ ಆಯುಧವನ್ನು ಹಿಡಿದಿದ್ದು ಬಲಗೈಯಲ್ಲಿ ಬೇಟೆಯಾಡಿದ (ಸತ್ತ) ಪ್ರಾಣಿಯನ್ನು ಎತ್ತಿಕೊಂಡು ಮುನ್ನಡೆಯುವಂತೆ ಚಿತ್ರಿಸಲಾಗಿದೆ.

೩) ಮತ್ತೊಂದು ಬಂಡೆಯ ಮೇಲೆ ನೀಳದೇಹದ ಒಬ್ಬ ವ್ಯಕ್ತಿಯನ್ನು ಚಿತ್ರಿಸಲಾಗಿದ್ದು ಆತನ ತಲೆಯು ಮಾತ್ರ ದುಂಡಾಗಿ ದೊಡ್ಡದಿದೆ. ಕೈ-ಕಾಲು ತಲೆಗಿಂತ ಚಿಕ್ಕದಾಗಿವೆ. ಈ ಚಿತ್ರದ ಬದಿಯಲ್ಲಿಯೇ ದ್ವಿರೇಖೆಯಲ್ಲಿ ಇನ್ನೊಬ್ಬ ವ್ಯಕ್ತಿಯನ್ನು ಚಿತ್ರಿಸಲಾಗಿದ್ದು, ಆತನ ತಲೆಯು ದುಂಡಗೆ, ಎರಡು ಕೈಗಳನ್ನು ಮೇಲಕ್ಕೆ ಎತ್ತಿದಂತೆ ಎರಡು ಕಾಲುಗಳನ್ನು ಅಗಲಿಸಿದಂತೆ ಇವೆ. ಇವುಗಳ ಬಾಹ್ಯ ರೇಖೆಯನ್ನು ಮಾತ್ರ ಚಿತ್ರಿಸಲಾಗಿದೆ.

೪) ಇಲ್ಲಿಯೇ ಬೇರೊಂದು ಸ್ಥಳದಲ್ಲಿ ಒಂದು ಮೇಜಿನಂಥ ಪೀಠೋಪಕರಣದ ಚಿತ್ರವನ್ನು ಚಿತ್ರಿಸಲಾಗಿದ್ದು, ಅದಕ್ಕೆ ಮುಂದಿನ ಎರಡು ಕಾಲುಗಳನ್ನು ಮಾತ್ರ ತೋರಿಸಲಾಗಿದೆ. ಒಂದು ಕಾಲಿಗೆ ಅಡ್ಡರೇಖೆಯನ್ನು ಎಳೆಯಲಾಗಿದೆ.

೫) ಈ ಬೆಟ್ಟದ ದಕ್ಷಿಣ ಭಾಗದ ಮತ್ತೊಂದು ಸ್ಥಳದಲ್ಲಿ ದೊಡ್ಡ ಬಂಡೆಯ ಬದಿಯಲ್ಲಿ ಎರಡು ದೊಡ್ಡ ಪಾತ್ರೆಗಳನ್ನು ಚಿತ್ರಿಸಲಾಗಿದೆ. ಎರಡು ಪಾತ್ರೆಗಳ ಸುತ್ತಲೂ ವಕ್ರರೇಖೆಯನ್ನು ಎಳೆಯಲಾಗಿದೆ. ಒಂದು ಪಾತ್ರೆಗೆ ಹಿಡಿಕೆಯನ್ನು ತೋರಿಸಲಾಗಿದೆ.

ಒಂಟೆಗುಡ್ಡದ ಪೂರ್ವ ಭಾಗದ ಅತೀ ಮೇಲುಗಡೆ ಒಂದು ಬಂಡೆಯಲ್ಲಿ ಎರಡು ಚಿಕ್ಕ-ಚಿಕ್ಕ ಮೀನುಗಳನ್ನು ಒಂದರ ಎದಿರು ಇನ್ನೊಂದನ್ನು ಚಿತ್ರಿಸಿರುವರು. ಅವುಗಳ ಬಾಹ್ಯ ರೇಖೆಯನ್ನು ಮಾತ್ರ ಎಳೆಯಲಾಗಿದೆ.

ಎಲ್ಲಾ ಕಲ್ಲಾಸರೆಯ ವರ್ಣ ಚಿತ್ರಗಳು ತಾವರ ಗೇರಾದಲ್ಲಿ ದೊರೆತಿವೆ. ಈ ಕಲ್ಲಾಸರೆಯ ವರ್ಣಚಿತ್ರಗಳೆಲ್ಲ ಮೊಟ್ಟ ಮೊದಲು ಶೋಧಿಸಲಾಗಿದೆ. ಈ ಹಂತದಲ್ಲಿ ಇನ್ನೂ ಹೆಚ್ಚಿನ ಕಾರ್ಯ ನಡೆಯಬೇಕಾಗಿದೆ.[3]

## ಆಧಾರ ಗ್ರಂಥಗಳು


ಸುಂದರ ಅ. ೧೯೮೭, *''ಪ್ರಾಗೈತಿಹಾಸಿಕ ಗವಿವರ್ಣ ಮತ್ತು ಬಯಲು ಬಂಡೆ ಚಿತ್ರಗಳು : ಕರ್ನಾಟಕ''* ಹರತಿಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ಶಿಕೋಟೆ

Neumayer, Erwin; 1983, *Protohiostoric Indian Rock Paintings,* Oxford University Press, Delhi



*ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಮಾರ್ಗದರ್ಶನಗೈದ ನನ್ನ ಗುರುಗಳಾದ ಡಾ॥ ಅ. ಸುಂದರ ಅವರಿಗೆ ನನ್ನ ಕೃತಜ್ಞತೆಗಳು*